ಜೀವನವೆಂಬ ರಂಗಸ್ಥಳ

ಬಿ.ವಿ. ಕಾರಂತರು ಕಟ್ಟಿದ ರಂಗಪರಂಪರೆ ಎಂದರೆ ಪ್ರಸ್ತುತ ಭಾರತದ ರಂಗಪರಂಪರೆ ಎನ್ನಬಹುದು. ಇವರು ತಿರುಗದ ಸ್ಥಳವಿಲ್ಲ. ತಿಳಿಯದ ಸಂಗತಿಗಳಿಲ್ಲ. ಸ್ಥಳಗಳನ್ನು ಸಂಗತಿಗಳನ್ನು ಒಮ್ಮಿಂದೊಮ್ಮೆಲೆ ತಲೆಗೆ ತುಂಬಿಕೊಂಡು ಸ್ವಲ್ಪ ಸಂಗತಿಗಳನ್ನು ರಂಗದ ಮೇಲೆ ದಾಖಲಿಸುವ ಭರದಲ್ಲಿ ಹಲವು ರಂಗಕೃತಿಗಳನ್ನು ನೀಡಿದವರು. ಪ್ರತಿ ರಂಗ ಕೃತಿ ನಿರ್ಮಾಣದಲ್ಲಿ ಇವರು ತೋರಿಸುತ್ತಿದ ಶ್ರದ್ಧೆ ಉದಾಸೀನ ನನ್ನಂಥವನನ್ನು ಬೆಚ್ಚು ಬೀಳಿಸುತ್ತಿತ್ತು. ನಾನು ಸಾಮಾನ್ಯವಾಗಿ ರಂಗಕೃತಿಯ ಗುಣಗಳೆಂದರೆ ತಾಂತ್ರಿಕ ಗುಣಗಳು, ನಾಟಕಕಾರನ ಕಸರತ್ತು ಇತ್ಯಾದಿ ಪಟ್ಟಿ ಮಾಡುತ್ತಿರುತ್ತೇನೆ. ಆದರೆ ಕಾರಂತರು ಒಂದನ್ನು ಮರೆಯಲು ಉದಾಸೀನ ತೋರಿಸುತ್ತಿದ್ದರು. ಕಾರಣ ಹಿಂದೆ ಮಾಡಿದ್ದು ಎಲ್ಲಿ ಪುನರಾವರ್ತನೆಯಾದೀತೋ ಎಂದು. ಇಂತಹ ಪುನರಾವರ್ತನೆಯನ್ನು ತಪ್ಪಿಸಲು ರಂಗಕೃತಿಯನ್ನು ತೀವ್ರವಾಗಿ ಅಭ್ಯಸಿಸಿ ತಾವು ನೋಡಿದ ಸ್ಥಳಗಳನ್ನು ಅಲ್ಲಿ ಚಿತ್ರ-ವಿಚಿತ್ರವಾಗಿ ನಡೆದಾಡುವ ನಾಟಕೀಯ ಸಂಗತಿಗಳನ್ನು ಮನದಟ್ಟು ಮಾಡಿಕೊಂಡಿದ್ದನ್ನು ಅತೀವ ಶ್ರದ್ಧೆಯಿಂದ ರಂಗಕೃತಿಗೆ ಬೆರಸುತ್ತಿದ್ದರು. ಹೀಗಾಗಿ ಅವರು ಸೃಷ್ಟಿಸುವ ಪ್ರತಿಯೊಂದು ರಂಗಕೃತಿಯು ಭಿನ್ನ ವಿಭಿನ್ನವಾಗಿರುತ್ತಿತ್ತು

ಇವರನ್ನು ಅಪಾರವಾಗಿ ಕಾಡುತ್ತಿದ್ದುದು ರಂಗ ಸಂಗೀತವೆನ್ನಬಹುದು.ರಂಗ ಸಂಗೀತದಿಂದ ನಟರ ಚಲನವಲನವನ್ನು ದ್ವಿಗುಣಗೊಳಿಸುತ್ತಿದ್ದರು. ರಂಗದ ಮೇಲೆ ನಟರೇ ಪ್ರಮುಖ ರಂಗ ಶಕ್ತಿ
ಎಂದು ತಿಳಿದೇ ಅಪಾರವಾದ ರಂಗಸಜ್ಜಿಕೆಯನ್ನು ರಂಗವಿನ್ಯಾಸವನ್ನು ಬದಿಗೆ ತಳ್ಳುತ್ತಿದ್ದರು.
ಮೊದ ಮೊದಲು ಕಾರಂತರ ರಂಗ ಪ್ರದರ್ಶನಗಳೆಂದರೆ ನಾನು ತಾತ್ಸಾರದ ಧ್ವನಿಯಲ್ಲಿ ಹೇಳುತ್ತಿದ್ದೆ.... ಅವರಿಗೆ ತಾಳವಿದ್ದರೆ ಸಾಕು ಅದನ್ನೇ ರಂಗ ಕೃತಿಯೆಂದು ತಿಳಿದು ಮಿಕ್ಕಿದ ಎಲ್ಲಾ ಅಂಶಗಳನ್ನು ಮರೆತುಬಿಡುತ್ತಾರೆ ಎಂದು. ನಂತರ ಇಳಿವಯಸ್ಸಿನಲ್ಲಿ ನನ್ನ ಅವರ ಸಂಬಂಧಗಳು ಹೆಚ್ಚು ಗಾಢವಾಗುತ್ತಾ ಹೋದಾಗ ಅವರನ್ನು ಹೆಚ್ಚು ಅರಿಯಲು ತೊಡಗಿದೆ. ಇವರು ನಟರನ್ನು ಹಾಗೂ ಗುಂಪನ್ನು ಬಳಸುತ್ತಿದ್ದ ರೀತಿ ತೀರ ವಿಚಿತ್ರವಾದುದು. 'ಸತ್ತವರ ನೆರಳು' ನಾಟಕದಲ್ಲಿ ಪುರಂದರದಾಸರ ಹಾಡುಗಳನ್ನು ಲವಲವಿಕೆಯಿಂದ ಬಳಸಿ ಜಿ.ಬಿ. ಜೋಶಿಯವರ ಸಾಹಿತ್ಯ ಕೃತಿಯಾದ 'ಸತ್ತವರ ನೆರಳು' ನಾಟಕದ ಸಬ್ ಟೆಕ್ಸ್ ನಲ್ಲಿ ಬೇರೊಂದು ರಂಗಕೃತಿ ನಿರ್ಮಾಣ ಮಾಡಿದರು. ಈ ರಂಗಕೃತಿ ಎಷ್ಟು ಸತ್ವಶಾಲಿಯಾಗಿತ್ತೆಂದರೆ ಏನೂ ಅರಿಯದವನು
ಎಲ್ಲವನ್ನು ಅರಿಯುವಷ್ಟು ಸತ್ವಪೂರ್ಣವಾಗಿತ್ತು. ರಂಗದ ಮೇಲೆ ಮಠ ಹಾಗೂ ಅದರ ಅನಾಚಾರ ಬಿಂಬಿತವಾಗುತ್ತಾ ಹೋದ ಹಾಗೆ ಪುರಂದರ ದಾಸರ ಹಾಡುಗಳು  ರಂಗ ಬಿಂಬಿತಕ್ಕೆ ಮೆರುಗನ್ನು ಕೊಟ್ಟು ಒಮ್ಮಿಂದೊಮ್ಮೆಲೆ 'ಸತ್ತವರ ನೆರಳು ಹಲವು ದಾಖಲೆಗಳನ್ನು ಸೃಷ್ಟಿಸಿದ್ದು ನಾವ್ಯಾರು ಮರೆಯುವಂತಿಲ್ಲ. ಹೀಗಾಗಿ ಬಿವಿ ಕಾರಂತರು ಮೆಯಿನ್ ಟೆಕ್ಸ್ಟ್  ನಿಂದ ಸಬ್ ಟೆಕ್ಸ್ಟ್ ಗೆ ಮೊರೆ ಹೋಗಿ ಅಲ್ಲಿಂದ ನಾಟಕದ ಅಂತರಂಗಕ್ಕೆ ಒಮ್ಮಿಂದೊಮ್ಮೆಲೆ ಇಳಿದುಬಿಡುತ್ತಿದ್ದರು. ಸಾಮಾನ್ಯವಾಗಿ ನಮ್ಮ ಇತ್ತೀಚಿನ ರಂಗ ನಿರ್ದೇಶಕರು ಬೌದ್ಧಿಕವಾಗಿ ಹಲವು ವಿಚಾರಗಳನ್ನು ಮನಸ್ಸಿನಲ್ಲಿ ಅದುಮಿಟ್ಟುಕೊಂಡು ಅದರ ಸಾಹಿತ್ಯಕ್ಕೆ ಹುಡುಕುತ್ತಾ ಹೋಗಿ ರಂಗಕೃತಿಯ ಆಸೆಯನ್ನು ತಮಗಿಚ್ಚೆಗನುಗುಣವಾಗುವಂತೆ ಕಾಣಬಯಸುತ್ತಾರೆ. ಬೌದ್ಧಿಕವಾದ ಕಸರೊತ್ತಿನೊಂದಿಗೆ ರಂಗಕೃತಿಗೆ ಇಳಿದು ಆ ರಂಗಕೃತಿ ಯಾರಿಗೂ ಮನ ಮುಟ್ಟದೆ ವಿಫಲವಾಗಿದ್ದನ್ನು ಹತ್ತು ಹಲವು ಬಾರಿ ನಾನು ನೋಡಿದ್ದೇನೆ. ಬಿ.ವಿ. ಕಾರಂತರಿಗೆ ಇದ್ದ ಸಾಹಿತ್ಯ ರಂಗದ ಸತ್ವವನ್ನು ತಿಳಿಯುವ ಅಪಾರವಾದ ಶಕ್ತಿಯನ್ನು ತಿಳಿಯಲು ಆರಂಭಿಸಿದ ಮೇಲೆ ನಾನು ಕಂಡ ಹಲವು ಸತ್ಯಗಳು ವಿಚಿತ್ರವಾದುದು. ಒಬ್ಬ ವ್ಯಕ್ತಿಗೆ ತನ್ನ ಆಸಕ್ತಿಯನ್ನೇ ಶಕ್ತಿ ಮಾಡಿಕೊಳ್ಳುವ ಹಂಬಲ ಕಾರಂತರನ್ನು ಹಾಗೂ ಅವರ ಸಾಧನೆಯನ್ನು ನೋಡಿ ಹೇಳಬಹುದು. ಆಸಕ್ತಿಯನ್ನು ಶಕ್ತಿ ಮಾಡಿಕೊಳ್ಳುವುದು ಎಂದರೆ ವ್ಯಕ್ತಿ ಸಮಷ್ಟಿಯ ಶಕ್ತಿ ಆಗುವುದೇ ಎಂದರ್ಥ.
ಈ ಮಾತು ಕಾರಂತರಿಗೆ
ಸ್ಪಷ್ಟವಾಗಿ ಅನ್ವಯಿಸುತ್ತದೆ.

ಪಾಣೆ ಮಂಗಳೂರಿನಿಂದ ಬಂಟ್ವಾಳಕ್ಕೆ ಹೊರಟು ತನ್ನ ಚಿಕ್ಕಪ್ಪ ಬಾಡಿಗೆಗೆ ತಂದ ಸೈಕಲ್ ಹಿಂದೆ ಕೂತು ಕಾಲು ಸೋಕ್ಸ್‌ಗೆ ಸಿಕ್ಕಿದ ನೋವಿನಲ್ಲೂ 'ಕೃಷ್ಣಲೀಲಾ' ನಾಟಕವನ್ನು ನೋಡಿ ರಂಗಭೂಮಿಯ ಕೃಷ್ಣನಾಗಿ "ಗೋಕುಲ ನಿರ್ಗಮನ'ವನ್ನು ಅತ್ಯಂತ ಯಶಸ್ವಿಯಾಗಿ ರಂಗಕ್ಕೆ ತಂದವರು. ನಾನು ಮೊದಲೇ ಹೇಳಿದಂತೆ ಹೊಸ ಸ್ಥಳ, ಸಂಗತಿ, ಆಸಕ್ತಿ ಇವೆಲ್ಲವು ನೆಗೆಯುವ ಮಿಡಿ ನಾಗರದಂತೆ ಕಾರಂತರನ್ನು ರೂಪಿಸಿತು. ಫಾರ್ಮ್ ಮತ್ತು ಕಂಟೆಂಟ್‌ಗಳ ಬಗ್ಗೆ ನಮ್ಮ ಪೀಳಿಗೆಯ ನಿರ್ದೇಶಕರು ತಲೆ ಕೆಡಿಸಿಕೊಂಡಿದ್ದೂ ಉಂಟು. ಆದರೆ ಕಾರಂತರು ಫಾರ್ಮ್ ಬಗೆಗಾಗಲಿ ಕಂಟೆಂಟ್ ಬಗೆಗಾಗಲಿ ಎಂದೂ ಸ್ಪಷ್ಟವಾಗಿ ನಿಗಾ ಕೊಟ್ಟು ರಂಗಕೃತಿಯನ್ನು ರೂಪಿಸುತ್ತಲೇ ಇರಲಿಲ್ಲ. ಇವರು, "ನಾಟಕವೆಂದರೆ ಅದೊಂದು ಎಲ್ಲ ಕಲೆಗಳ ಸಂಗಮ. ಎಲ್ಲ ಹರಿಯುವ ನದಿಗಳ ಮಡುವು" ಎಂದು ಭಾವಿಸುತ್ತಿದ್ದರು. ಹೀಗಾಗಿ ಇವರ ರಂಗ ಪ್ರೀತಿ ಹಲವು ಸೆಲಬ್ರೇಷನ್ಗಳ ಸಂಗಮವೇ ಆಗಿರುತ್ತಿತ್ತು. ಬರೀ ರಂಗಸ್ಥಳ ಇವರನ್ನು ಕಾಡುತ್ತಿತ್ತು. 'ಕಿಂದರ ಜೋಗಿ'ಗೆ ಇವರು ಹರಡಿಕೊಂಡಿದ್ದ ರಂಗಸ್ಥಳ ಅತಿದೊಡ್ಡದು. ಆದರೂ ಮತ್ತಷ್ಟು ಸ್ಥಳವನ್ನು ಆಕ್ರಮಿಸಿಕೊಂಡು ಹೊಸ ರಂಗಾವರಣಕ್ಕೆ ನಾಂದಿ ಹಾಡಿದರು. 'ಕಿಂದರ ಜೋಗಿ, `ಗೋವಿನ ಹಾಡು' ಈ ಎರಡು ಮಹಾಕಾವ್ಯಗಳ ಗುಣ ಶ್ರೇಷ್ಠತೆ ಎಂದರೆ ಮುಗ್ಧತೆ ಮತ್ತು ಸಮಷ್ಟಿಯ ನಡೆ.
ಸಮಷ್ಟಿಯ ನಡೆ ರೂಪಿಸಿರುವ ಹಿನ್ನೆಲೆ ಅದಕ್ಕೆ ಮುನ್ನುಡಿಯಾಗಿ ಬಿ.ವಿ. ಕಾರಂತರು ಕೊಟ್ಟ ಹೆಜ್ಜೆ ಮುಗ್ಧತೆ. ಅವರು ಶಕ್ತಿಶಾಲಿಯಾಗಿ ಕಂಡಿದ್ದು ತಮ್ಮ ಮುಗ್ಧತೆಯಿಂದ ಹಾಗೂ ಅಪಾರ ಹಿಂಬಾಲಕರಿಂದ. ಮುಗ್ದತೆ, ಜನಪ್ರಿಯತೆ ಸಾಮಾನ್ಯವಾಗಿ ಒಂದಾಗುವುದು ಅಪರೂಪ. ಮುಗ್ಧತೆಯನ್ನು ಮುನ್ನುಡಿಯಾಗಿಟ್ಟುಕೊಂಡು ಹಿಮಾಚಲ ಪ್ರದೇಶದಿಂದ ಕನ್ಯಾಕುಮಾರಿಯತನಕ ಕಾರಂತರು ಯಾವ

ಪ್ರತಿಫಲವನ್ನು ಅಪೇಕ್ಷಿಸದೆ, “ಬೊಮ್ಮನಹಳ್ಳಿಯ ಕಿಂದರ ಜೋಗಿ'ಯ ತರಹ ಅಡ್ಡಾಡಿದ್ದರು. ಇವರು ಬಾಲ್ಯದಲ್ಲಿ ಪಟ್ಟ ಕಷ್ಟವನ್ನು ಹಂಚಿಕೊಳ್ಳಲು ಇವರು ನಿಂತಿದ್ದು ಬನಾರಸ್ಸಿನ ಗಂಗಾ ನದಿಯ ಮುಂದೆ. ಹೊಟ್ಟೆಪಾಡಿಗೆ ಹಿಂದಿ ಕಲಿತು, ಹಿಂದಿ ಅಧ್ಯಾಪಕರಾಗಿ ಹಲವರು ಬಲ್ಲ ಭಾಷೆಯನ್ನು ತಮ್ಮ ಅಂಗೈಯಲ್ಲಿಟ್ಟುಕೊಂಡು ದೆಹಲಿಯಲ್ಲಿ ಹಿಂದಿಯ ಉಪಾಧ್ಯಾಯರಾಗಿ ಕಾಲ ಕಳೆಯಲು ತೀರ್ಮಾನಿಸಿದರು. ಆದರೆ ಕರಾವಳಿಯ ಯಕ್ಷಗಾನ, ಮದ್ದಳೆ, ಗುಬ್ಬಿ ಕಂಪನಿಯ ಕಾರಂತರನ್ನು ಎಡಬಿಡದೆ ಕಾಡತೊಡಗಿದವು. ಈ ಎಲ್ಲವನ್ನು ಅಭಿವ್ಯಕ್ತಿಗೊಳಿಸಿಕೊಳ್ಳಲು ಬಿ.ವಿ. ಕಾರಂತರು ಆಯ್ದುಕೊಂಡಿದ್ದು ರಂಗಸ್ಥಳವನ್ನು, ಅವರಿಗೆ ತಾಯಿಯ ಪ್ರೀತಿಯ ಕುರುಹಾಗಿ ಬಂದಿದ್ದು, ತಾಯಿಯವರು ಹಾಡುತ್ತಿದ್ದ ಹಾಡುಗಳು, ಪ್ರೇಮಾರವರನ್ನು ಮದುವೆಯಾಗಿದ್ದು ವಿಚಿತ್ರವೆ. ಪ್ರೇಮ ವಿವಾಹವಲ್ಲ. ರಂಗಸಂಗಾತಿಯನ್ನು ನೋಡಿಕೊಳ್ಳಲು ಇನ್ನೊಬ್ಬ ರಂಗಸಂಗಾತಿ ಧಾವಿಸಿದಳು ಎನ್ನಬಹುದು. ಅಪಾರವಾಗಿ ಓದುವ ಗೀಳನ್ನು ಹಚ್ಚಿಕೊಂಡಿದ್ದ ಬಿ.ವಿ. ಕಾರಂತರು ಅಂದಿನ ಇಬ್ರಾಹಿಂ ಅಲ್ಕಾಜಿ ಅವರ ಬಳಿ ರಂಗ ಶಿಕ್ಷಣ ಕಲಿತು ಆ ಶಿಕ್ಷಣ ಸಂಸ್ಥೆಗೆ ನಿರ್ದೇಶಕರಾದರು. ಕಾರಂತರ ಮಾತಿನಲ್ಲೇ ಹೇಳುವುದಾದರೆ 'ಜೀವನದ ಉದ್ದೇಶಗಳು ಹಲವು. ಅಂದು ನಾನು ಕಣ್ಣು ಬಿಟ್ಟಾಗ ನನ್ನ ಕಣ್ಣ ಮುಂದೆ ಇದ್ದಿದ್ದು ಗಾಂಧೀಜಿಯವರು ತರುತ್ತಿದ್ದ 'ಹರಿಜನ' ಪತ್ರಿಕೆ. ರಾಷ್ಟ್ರೀಯ ಹೋರಾಟ, ಜೈಲಿನ ವಾಸ ಪ್ರಮುಖ ಆಕರ್ಷಣೆ ನಮ್ಮಂಥವರಿಗೆ. ಆದರೆ ನಾನು ಜೈಲಿನ ವಾಸವನ್ನು ಸವಿದದ್ದು ನಂತರ ನನ್ನನ್ನು ಅಪಾರವಾಗಿ ಕಾಡುತ್ತಿದ್ದುದು ಗುಬ್ಬಿ ಕಂಪನಿ ಹಾಗೂ ನಾನು ಅಭಿನಯಿಸಬೇಕಾಗಿದ್ದ ಹೆಣ್ಣಿನ ಪಾತ್ರಗಳು. ಪದೇ ಪದೇ ಗಡ್ಡ ಬೋಳಿಸಿ ರಂಗದ ಮೇಲೆ ಬರಬೇಕಿತ್ತು- ಲಂಗ ಧಾವಣಿ ಉಟ್ಟು ಹೀಗಾಗಿ ಗಡ್ಡ ಬಿಟ್ಟೆ' ಎಂದು ನಗುತ್ತಾ ಹೇಳುತ್ತಿದ್ದರು. ಇವರು. ಪ್ರೇಮಾ, ಬಿ.ಎಂ. ಷಾ, ನಾರಾಯಣ್‌ರಾವ್, ಎಂ.ಎಸ್. ಸತ್ಯು ದೆಹಲಿಯಲ್ಲಿ `ದಿಶಾಂತರ' ಎಂಬ ತಂಡ ಕಟ್ಟಿ ದೇಶದಲ್ಲೆಲ್ಲಾ ರಂಗ ಸಂಸ್ಕೃತಿಯನ್ನು ಹರಡಲು ಮುಂದಾದರು. ರಂಗ ಚಳವಳಿಗೆ ಸ್ಪಷ್ಟ ದಿಕ್ಕನ್ನು ಇಡೀ ದೇಶಕ್ಕೆ ಕೊಟ್ಟವರಲ್ಲಿ ಇವರೇ ಅಗ್ರಗಣ್ಯರೆಂದರೆ ತಪ್ಪಾಗಲಾರದು.

ಕಾವಾಲಂ ನಾರಾಯಣ್ ಪಣಿಕ್ಕರ್ ತರಹ, ರಥನ್ ಥಿಯಾಮ್ ತರಹ, ಕನ್ನಯ್ಯಲಾಲ್ ತರಹ ಯಾವುದೇ ಕಲಾ ಆಯಾಮಕ್ಕೆ ಸಿಕ್ಕದ ಬೆಳ್ಳಿ ಮೀನಿನಂತೆಯೇ ಹರಿಯುವ ರಂಗ ನದಿಯಲ್ಲಿ ಚಿಮ್ಮುತ್ತಾ ಇವರು ಸಾಗಿದ ದಾರಿ ಅಪಾರ. ಇವರು ತೆಗೆದುಕೊಂಡ ಸಾಹಿತ್ಯ ಶ್ರೇಷ್ಠರನ್ನು ನೋಡಿ: ಶ್ರೀರಂಗ, ಲಂಕೇಶ್, ಗಿರೀಶ್ ಕಾರ್ನಾಡ್, ಕೆ.ವಿ. ಸುಬ್ಬಣ್ಣ, ಚಂದ್ರಶೇಖರ ಕಂಬಾರ, ಬಿ.ಎಂ. ಷಾ, ಚಂದ್ರಶೇಖರ ಪಾಟೀಲ, ಸಂಸ ಜಿ.ಬಿ. ಜೋಶಿ, ಕುವೆಂಪು, ಪು.ತಿ.ನ., ಬಿ.ಎಂ.ಶ್ರೀ. ಇವರೆಲ್ಲರನ್ನು ರಂಗ ಕೃತಿಯ ಶ್ರೇಷ್ಠರಾಗಿ ನಿಲ್ಲಿಸಿದ್ದು ಬಿ.ವಿ. ಕಾರಂತರೆ, ಬಹುಶ ಇದಕ್ಕೆ ಇರಬೇಕು ಬಿ.ವಿ. ಕಾರಂತರು ಹೆಚ್ಚು ಬೌದ್ಧಿಕ ಚರ್ಚೆ ಮಾಡದೆ ಕೃತಿಯ ಒಡಲಾಳಕ್ಕೆ ಒಮ್ಮಿಂದೊಮ್ಮೆಲೆ ಬೆಳ್ಳಿ ಮೀನಿನ ತರಹ ಜಿಗಿದು ಬಿಡುತ್ತಿದ್ದರು.

ಇವರು ಸೃಷ್ಟಿಸಿದ ರಂಗಪರಂಪರೆ ಅನನ್ಯ.ಅಂದಿನ ಇವರ ಏವಂ ಇಂದ್ರಜಿತ್', 'ಘಾಸಿರಾಮ್ ಕೊತ್ವಾಲ್ ಕಾಳಿದಾಸರ, ಶೊಂಭು ಮಿತ್ರರ. ಮೋಹನ್ ರಾಕೇಶ್ ರ, ವಿಜಯ್ ತೆಂಡೂಲ್ಕರ್ ಹಾಗೂ ಪಂಜಾಬಿನ ನಾಟಕಗಳು ಮತ್ತು ಆಂಧ್ರದ ಸುರಭಿ ತಂಡ ದ ನಾಟಕಗಳು, ಕಾರಂತರಂತಹ ಬೆಳ್ಳಿ ಮೀನಿಗೆ ಮಾತ್ರ ಸಾಧ್ಯ.

ಜೀವನವೆಂಬ ರಂಗಸ್ಥಳ
ಆಡಿ ಮುಗಿಸದ ಕಾರಂತ ಪಾತ್ರ
ಸಿ.ಜಿ.ಕೆ.
ಸುಧಾ ೧೯ ಸಪ್ಟೆಂಬರ್ ೨೦೦೨.
________ ________ _________.